# ಶ್ರೀ ರಾಮಾನುಜ ಷಟ್ಪದಿ

ವಂದೇ ರಾಮಾನುಜ ಗುರುಂ
ಶೇಷಾಂಶ ವಿಮಲೋದಯಂ ।
ಪರಬ್ರಹ್ಮಾಪಿ ಯದ್ವಾಚಾ
ಮುಕ್ತಂ ಸಂಸಾರ ಬಂಧನಾತ್ ॥೧॥

ರಾಮಾನುಜ ಇತಿ ಖ್ಯಾತಂ
ಪರಿಷ್ಕೃತ ಯುಗ ತ್ರಯಂ ।
ಪ್ರಾಪ್ಯಪ್ರಾಪಕಯೋರೇಕಂ
ವಾಚಕಂ ಹೃದಿ ಧಾರ್ಯತಾಂ ॥೨॥

ಕಾಷಾಯಾಂಬರ ಸಂವೀತಂ
ತ್ರಿದಂಡ ಪರಿ ಮಂಡಿತಂ ।
ಸ್ಮರಾಮಿ ಸಂಯಮೀಂದ್ರಸ್ಯ
ದಿವ್ಯ ಮಂಗಳ ವಿಗ್ರಹಂ ॥೩॥

ಪ್ರಭಾ ಪ್ರಭಾವ ವಿಖ್ಯಾತೈಃ
ಸುವರ್ಣ ಲಲಿತೈರ್ಘನೈಃ ।
ನವರತ್ನೈರಲಂ ಚಕ್ರೇ
ಭಾರತೀಂ ಭಗವನ್ಮಯೀಂ ॥೪॥

ಶ್ರುತಿ ಸೀಮಂತ ರತ್ನಾನಿ
ವಿಪರ್ಯಸ್ತಾನ್ಯನೇಕಶಃ ।
ಗ್ರಥಿತ್ವಾ ವ್ಯಾಸ ಸೂತ್ರೇಣ
ವೈಜಯಂತ್ಯಾ ನ್ಯಯೂಯುಜತ್ ॥೫॥

ಅಹೋ ಯತೀಂದ್ರ ! ತೇವಾಣೀ
ಶ್ರೋತ್ರ ಚಿತ್ತಾಪಹಾರಿಣೀ !
ತತ್ಸಮಾನಾಸ್ತಿ ? ಚೇದಸ್ತಿ ।
ಕ್ವಚಿದೇವಾಸ್ತಿ ನ್ವೈ ಧ್ರುವಂ ॥೬॥

ಶ್ರೀಸಂಪ್ರದಾಯ ಸಿದ್ಧಾಂತ—
ದರ್ಶನ ಸ್ಥಾಪಕಾಯ ಚ ।
ತಸ್ಮೈ ರಾಮಾನುಜಾಚಾರ್ಯಾಯ
ಯತಿರಾಜಾಯ ಮಂಗಳಂ ॥

—ವಿದ್ವಾನ್ ಕೆಲ್ಲಪಿಳ್ಳೈ ಶರ್ಮಾ

ಹೆಬ್ಬಾರ್ ಶ್ರೀ ವೈಷ್ಣವ ಸಭಾ, ಬೆಂಗಳೂರು
ಸುವರ್ಣ ಮಹೋತ್ಸವ ಸಂಚಿಕೆ—1968 ಇಂದ]

# ಶ್ರೀ ವೈಕುಂಠ ಗದ್ಯಂ

[ಮೂಲ : ಭಗವಾನ್ ರಾಮಾನುಜಾಚಾರ್ಯ] [ವಿವರಣೆ : ಸಂಪಾದಕ : **ಎಚ್. ಆರ್. ಸಂಪತ್ಕುಮಾರನ್**]

ಸಾಮಾನ್ಯವಾಗಿ ಸ್ತೋತ್ರ ಕಾವ್ಯವು, ಪದ್ಯಾತ್ಮಕವಾಗಿಯೇ ಇರುವುದೆಂದು ಬಹಳಷ್ಟು ಜನರ ನಂಬಿಕೆ. ಆದರೆ ಗದ್ಯಾತ್ಮಕವಾಗಿಯೂ ಇರಬಹುದು ಎಂದರೆ, ತುಸು ಆಶ್ಚರ್ಯ ಮಾತ್ರ ಸರಿ! ಆದರೆ, ಭಗವಾನ್ [1]ರಾಮಾನುಜರ ಗದ್ಯ ತ್ರಯಗಳನ್ನು ಓದಿದರೆ, ಇವುಗಳಲ್ಲೂ ಕಾವ್ಯದ ಸ್ತೋತ್ರವು, ಓತ-ಪ್ರೋತವಾಗಿರುವುದು ಕಾಣಬರುತ್ತದೆ. ಇಂತಹ ಗದ್ಯ-ಕಾವ್ಯವನ್ನು ಜಗತ್ತಿಗೆ ನೀಡಿದ ಕೆಲವೇ ಮಹನೀಯರಲ್ಲಿ ಭಗವಾನ್ ರಾಮಾನುಜರೂ ಒಬ್ಬರು.

ಸಿದ್ಧಪುರುಷನ ಪದ್ಯಾತ್ಮಕವಾದ ಕಾವ್ಯಕ್ಕೆ ಮಾತ್ರ "ಮಂತ್ರ" ಶಕ್ತಿಯಿರುವಂತೆ, ಈ ಗದ್ಯತ್ರಯಗಳಿಗೂ ಆ ಶಕ್ತಿ ಸಂಚಯವಾಗಿದೆ. ಅದು ಇವುಗಳ ವೈಶಿಷ್ಟ್ಯ. ಓದುಗ ಇವನ್ನು ಓದುತ್ತಿರುವಾಗ ಈ 'ಸ್ಪಂದನ'ವನ್ನು ಅನುಭವಿಸುತ್ತಾನೆ. ರಾಮಾನುಜರು ಈ ಪದಗಳಿಗೆ ಅಂತಹ "ಕಂಪನ" ಶಕ್ತಿ ನೀಡಿ, ಅವುಗಳನ್ನು ಚೇತನಗೊಳಿಸಿದ್ದಾರೆ. ಇಂತಹ ವೈಶಿಷ್ಟ್ಯವನ್ನು [2]ವೇದಾಂತ ದೇಶಿಕರ ಕೃತಿಗಳಲ್ಲಿ (ಅವರ ಕೃತಿ 121) ಮತ್ತು ಕುಲಶೇಖರ ಆಳ್ವಾರರ (ಚಾರಿತ್ರಿಕ ಕಾಲ ಕ್ರಿ. ಶ. 767. ಶಂಕರರ ಕಾಲ : 788-820) 'ಮುಕುಂದ ಮಾಲಾ'ದಲ್ಲಿ ಕಾಣಬಹುದಾಗಿದೆ. ಇವರ ಕೃತಿಗಳಲ್ಲಿ ಬಳಸಿದ ಮಾತುಗಳು ಸರಳ, ಆದರೆ ಭವ್ಯ ಭಾವಭರಿತ!

ಭಕ್ತರಿಗೆ ಭಗವಾನ್ ರಾಮಾನುಜರು ಇಲ್ಲಿ ಶ್ರೀ ವೈಕುಂಠದ ವಾಸ್ತವಿಕ ಚಿತ್ರದ ವೀಕ್ಷಕ ವಿವರಣೆಯಂತೆ-running-commentary-ವಿವರಣೆ ನೀಡಿ, ನಮ್ಮನ್ನು ಈ ಲೋಕದಿಂದ ಆ ಲೋಕಕ್ಕೆ ಸ್ವಲ್ಪ ಹೊತ್ತು ಕರೆದೊಯ್ದು; ಅಲ್ಲಿನ ದೃಶ್ಯವನ್ನು Tourist Guide ನಂತೆ ವಿವರಿಸುತ್ತಾರೆ! ಓದುಗರು ಅವರ ಮಾತಿನ ರಾಕೆಟ್ (Rocket) ಹತ್ತಿ, ಶ್ರೀ ವೈಕುಂಠವನ್ನೇ ನೋಡಿ ಬರುತ್ತಾರೆ! ಅದೊಂದು ಹೃದಯಂಗಮ ಅನುಭವ!

ರಾಮಾನುಜರಿಗೆ ಇನ್ನೂ ಭಕ್ತಿಯ ಆವೇಶ ಇಳಿಯದೇ ಇರುವುದರಿಂದ, ಶ್ರೀರಂಗ ಗದ್ಯವು-**ಸ್ವಾಧೀನ ತ್ರಿವಿಧ ಚೇತನ**-ದಿಂದ ಪ್ರಾರಂಭವಾಗಿರುವಂತೆ, ಇಲ್ಲೂ

---

1. ಭಗವಾನ್ ರಾಮಾನುಜರು ಕ್ರಿ. ಶ. 1017-1137—120 ವರ್ಷ.
2. ವೇದಾಂತ ದೇಶಿಕರು ಕ್ರಿ. ಶ. 1267-1369—102 ವರ್ಷ.

ಸಹ ಹಾಗೆಯೇ ಪ್ರಾರಂಭವಾಗಿದೆ. ಭಗವಾನ್ ರಾಮಾನುಜರಿಗೆ ತಮ್ಮ ಯೋಗ ದೆಶೆಯಲ್ಲಿ ಶ್ರೀ ವೈಕುಂಠದ ದರ್ಶನವಾಗಿರಬೇಕು ! ಇಲ್ಲದಿದ್ದರೆ ಇಂತಹ ವಾಸ್ತವ ಚಿತ್ರ ಮೂಡಿಬರಲು ಸಾಧ್ಯವೇ ಇಲ್ಲ ! ಆದ್ದರಿಂದ ಭಗವಾನ್ ರಾಮಾನುಜರ ಅನುಗ್ರಹವಾದರೆ, ನಮಗೂ ಈ ದೃಶ್ಯ ನೋಡಲು ಸಾಧ್ಯವೇ !

ರಾಮಾನುಜರು ಓದುಗರನ್ನು [ಪ್ಯಾರಾ 12ರಿಂದಲೇ Spiritual picknic ಗಾಗಿ] ಶ್ರೀ ವೈಕುಂಠಕ್ಕೆ ರಸಯಾತ್ರೆ ಕರೆದೊಯ್ಯುತ್ತಾರೆ. ಅಲ್ಲಿ ತುಂಬಿರುವ ಐಶ್ವರ್ಯದ ಮುಂದೆ ಇಂದ್ರನೂ ಭಿಕಾರಿಯಂತೆ ಕಾಣುತ್ತಾನೆ. ಆತನ 'ಅಲಕಾ ನಗರಿ'ಯೂ ಸಹ ಕು–ಗ್ರಾಮವಾಗಿ ಕಾಣುತ್ತದೆ ! ಆ ಶ್ರೀ ವೈಕುಂಠ ನೋಡಲು ಯಾರ ಕಣ್ಣಿಗಾದರೂ ಹರ್ಷವಾಗದೆ ಇರದು. ಶ್ರೀಮನ್ನಾರಾಯಣನ ವರ್ಣನೆಯಂತೂ ಕಣ್ಣಿಗೆ ಕಟ್ಟಿದಂತಿದೆ.

ನಾರಾಯಣನನ್ನು ವರ್ಣಿಸಲು ರಾಮಾನುಜರಿಗೆ 'ಗುಣವಾಚಕ'ಗಳ ಕೊರತೆಯಾಗಿರುವಂತೆ ಇಲ್ಲಿ ಕಾಣುತ್ತದೆ. ಆದ್ದರಿಂದ ಅವರು ಹೇಳಿದ್ದೇ ಹೇಳುತ್ತಾರೆ! ಅಂತಹ ಐಸಿರಿ "ಅವನದು" !

ವೇದಾಂತ ದೇಶಿಕರು ಒಮ್ಮೆ "ನನಗೆ ಅಲ್ಲಿನ ವೈಕುಂಠ ಬೇಡ, ತಿರುಚನಾಪಳ್ಳಿ ಹತ್ತಿರದ ಶ್ರೀರಂಗವೇ ಸಾಕು" ಎಂದಿದ್ದರಂತೆ. ಭಗವಾನ್ ರಾಮಾನುಜರು ವೇದಾಂತ ದೇಶಿಕರಿಗೆ ಸ್ವಯಂ ಹೇಳಿದ್ದರೆ, ಆಗೇನನ್ನುತ್ತಿದ್ದರು ಎಂಬುದು–ತುಸು ಯೋಚಿಸುವ ವಿಷಯ. ಹಾಗೆಂದಾಕ್ಷಣ, ನಿಜ ವೈಕುಂಠದ ದರ್ಶನ ತಮಗೆ ಬೇಡ ಎಂದರ್ಥವಲ್ಲ. ಶ್ರೀರಂಗವೂ ಅಷ್ಟೇ ಚೆನ್ನ ಎಂಬರ್ಥ. ಅದು ಶ್ರೀ ವೈಕುಂಠ ! ಇದು ಭೂ ವೈಕುಂಠ !

ಇಲ್ಲಿ, ಸ್ವತಃ ಒಂದು ದಿವ್ಯವಾದ ದೃಶ್ಯವನ್ನು ನೋಡಿ ಬಂದವರು ಹೇಳುವಂತೆಯೇ ಇಲ್ಲಿನ ವಿವರಣೆಯಿದೆ. ಇದನ್ನು ಸಾಕ್ಷಿಯಾಗಿ ನೋಡಬೇಕಾದರೆ ಪ್ಯಾರಾ 38 ನೋಡಬಹುದು.

ನಮಗೆ ರಾಮಾನುಜರು ಆ ದೃಶ್ಯದ ವೀಕ್ಷಕ ವಿವರಣೆ ನೀಡಿ, ಸುಮ್ಮನೆ ನಮ್ಮನ್ನು ಅಲ್ಲಿಗೇ ಬಿಡುತ್ತಿಲ್ಲ. ನಾವು ಅಲ್ಲಿ ಶಾಶ್ವತವಾಗಿ ಇರಬೇಕೆಂದು ಬಯಸುತ್ತಾರೆ. ಅದಕ್ಕಾಗಿ ಮಾಡಿಕೊಳ್ಳಬೇಕಾದ ಸಿದ್ಧತೆ ತಿಳಿಸಿಕೊಡುತ್ತಾರೆ.

ಹಾಗೆ ಶುದ್ಧ ಮನಸ್ಸಿನಿಂದ ಆತನನ್ನು ಸೇವಿಸಿದರೆ, ಅವನು ನಮ್ಮನ್ನು ಹೇಗೆ ಕಣ್ ಸನ್ನೆಯಿಂದ ಒಳಗೆ ಕರೆಯುವುದನ್ನೂ ಸಹ ಹೇಳಿದ್ದಾರೆ. ಅಂತಹ ಭಕ್ತರನ್ನು

ಅಲ್ಲಿನ ದ್ವಾರಪಾಲಕರು ಕನಿಕರದಿಂದ ನೋಡಿ, ಮುಂದೆ ಭಕ್ತರು ಒಳಗೆ ಹೋಗಿ 'ನಾರಾಯಣ'ನನ್ನು ಭಕ್ತಿಯಿಂದ ಸೇವಿಸಲು ಸೂಚ್ಯ–ಅನುಮತಿ ನೀಡುತ್ತಾರೆ ಎಂಬುದನ್ನು ಸಹ ವಿವರಿಸಿದ್ದಾರೆ. ಅಲ್ಲಿನ ಒಳಾಂಗಣದಲ್ಲಿ ಭಕ್ತರು ಹೇಗೆ ಇರಬೇಕು ಎಂಬುದನ್ನು ಎಳೆ ಎಳೆಯಾಗಿ ವಿವರಿಸಿದ್ದಾರೆ, ನಮಗಾಗಿ ಭ. ರಾಮಾನುಜರು.

ಬಹುಶಃ ಇಂತಹ ವೀಕ್ಷಕ ವಿವರಣೆ ಜಗತ್ತಿನ ಯಾವ ಸಾಹಿತ್ಯ ಸರೋವರದಲ್ಲೂ ಇಂತಹ ರಂಪಾಮುಕ್ತೈ (ಕೆಂಪು ಕಮಲ)–ಇರಲಾರದು ! ನಾವು ಶ್ರೀಮನ್ನಾರಾಯಣನ ಅನುಗ್ರಹ ಪ್ರಾಪ್ತಿಗೆ ಅರ್ಹತೆ–Entrance qualification–ರಾಮಾನುಜರು ನಮಗೆ ವಿಧಿಸಿದುದು : **ಆತನಲ್ಲಿ** ಪ್ರೇಮ–ಭಕ್ತಿ, ಮತ್ತು ಸರ್ವಪ್ರೀತಿ ನಮ್ರ ಶರಣಾಗತಿ! ಅಷ್ಟೇ !

ರಾಮಾನುಜರಂತಹ ಸೌಶೀಲ್ಯ, ಸುಲಭ ಕರುಣಾಳು ಮತ್ತೆ ಎಲ್ಲಿ ಹುಟ್ಟಿ ಯಾರು ? ಅಂತಹವರನ್ನು ನಮ್ಮವರನ್ನಾಗಿ ಪಡೆದ ಭಾಗ್ಯ ನಮ್ಮದು ಅಲ್ಲವೇ ?

ಆದರೆ ಅಂತಹ ಹೆಮ್ಮೆಗೆ ತಕ್ಕಾಗಿ ನಾವು ಬಾಳಬೇಕಾಗಿದೆ.

[ ಶ್ರೀ ವೈಕುಂಠ ಗದ್ಯವನ್ನು ಸಾಮಾನ್ಯವಾಗಿ ರಾತ್ರಿ ಹೊತ್ತು ಅನುಸಂಧಾನ ಮಾಡುವುದು–ಒಂದು ಪುರಾತನ ಸಂಪ್ರದಾಯ. ]

## ಸುಭಾಷಿತ

ಸತ್ಯದ ಹಿಂದೆ ದುಃಖ ಅಡಗಿರುತ್ತದೆ.
ದುಃಖದ ಹಿಂದೆ ಸುಖ ಅಡಗಿರುತ್ತದೆ.
ಬಿಸಿಲಿನೊಂದಿಗೆ ನೆರಳು ಇರುತ್ತದೆ.
ಪ್ರಕಾಶದೊಂದಿಗೆ ಕತ್ತಲೆಯೂ ಇರುತ್ತದೆ.
ಜನನದೊಂದಿಗೆ ಮೃತ್ಯುವೂ ಇದೆ.

ಈ ದ್ವಂದ್ವಗಳಿಂದ ಪಾರಾಗುವುದೇ ಅನಾಸಕ್ತಿ. ಮನಸ್ಸನ್ನು ಸ್ವಚ್ಛವಾಗಿರಿಸಿರಿ, ಅಲ್ಲಿ ಭಗವಂತನು ವಿರಾಜಮಾನನಾಗಿರುವಂತೆ ಮಾಡಿರಿ. ಈ ರೀತಿ ಮಾಡುವುದೇ ಸ್ವರ್ಗ. **—ಗಾಂಧೀಜಿ**

ಹತ್ತು ರೂ. ದಾನ ನೀಡಿ ಸ್ಥಳ ದಾನ ಮಾಡಿರುವವರು :
**ಶ್ರೀಮತಿ ಸರೋಜ ನಾರಾಯಣ್,** ತುಮಕೂರು.

# ಶ್ರೀ ವೈಕುಂಠ ಗದ್ಯಂ

ಆಳವಂದಾರ್‌ರವರನ್ನು ಕುರಿತು :

**ಯಾಮುನಾರ್ಯ ಸುಧಾಂಬೋಧಿಂ ಅವಗಾಹ್ಯ ಯಥಾಮತಿ ।**
**ಆದಾಯ ಭಕ್ತಿಯೋಗಾಖ್ಯಂ ರತ್ನಂ, ಸಂದರ್ಶಯಾಮಿ ಅಹಂ ॥**

ಶ್ರೀ ಯಾಮುನಾಚಾರ್ಯರ ವಚನಾಮೃತಸಾಗರದಲ್ಲಿ ಮುಳುಗಿ, ಭಕ್ತಿಯೋಗವೆಂಬ ರತ್ನವನ್ನು ತೆಗೆದು, ನನ್ನ ಬುದ್ಧಿ ಇರುವಷ್ಟರಮಟ್ಟಿಗೆ – ಇದನ್ನು ಪ್ರದರ್ಶಿಸುತ್ತೇನೆ.

[ತನಿಯನ್] [ಭಗವಾನ್ ರಾಮಾನುಜರು ?]

1. [ ಹೇ ಭಗವಾನ್ ! ] **ಸ್ವಾಧೀನ ತ್ರಿವಿಧ ಚೇತನ, ಅಚೇತನ, ಸ್ವರೂಪ, ಸ್ಥಿತಿ ಪ್ರವೃತ್ತಿ ಭೇದಂ !**

[ ಬ್ರಹ್ಮಾಂಡದ ] ಎಲ್ಲ ಚೇತನ ಅಚೇತನ ವಸ್ತುಗಳ : ಸ್ವರೂಪ, ಸ್ಥಿತಿ ಪ್ರವೃತ್ತಿ ಭೇದಗಳು–ನಿನ್ನ ಅಧೀನದಲ್ಲಿವೆ !

2 **ಕ್ಲೇಶ ಕರ್ಮಾದಿ ಅಶೇಷ ದೋಷ ಅಸಂಸ್ಪೃಷ್ಟಂ !**

ಕ್ಲೇಶ, ಕರ್ಮಗಳ, ಯಾವುದೇ ದೋಷಗಳ ಸೋಂಕು, ನಿನಗಿಲ್ಲ !

3. [ಹೇ ಭಗವಾನ್ !] **ಸ್ವಾಭಾವಿಕ, ಅನವಧಿಕಾತಿಶಯ, ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಃ; ಪ್ರಭೃತಿ ಅಸಂಖ್ಯೇಯ ಕಲ್ಯಾಣ ಗುಣ ಗಣೌಘ ಮಹಾರ್ಣವಂ !**

ಅಪರಿಮಿತವಾದ, ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು, ಇತ್ಯಾದಿ ಅಸಂಖ್ಯವಾದ ಮಂಗಳ ಗುಣಗಳು ; ನಿನಗೆ ಬಹಳ ಸಹಜವಾಗಿವೆ ! ಈ ಕಲ್ಯಾಣ ಗುಣ ಸಮೂಹವೆಂಬ ಪ್ರವಾಹಗಳಿಗೆ, ನೀನು ಸಾಗರದೋಪಾದಿಯಲ್ಲಿದ್ದೀಯೇ !

4. [ಹೇ ಭಗವಾನ್ !] **ಪರಮ ಪುರುಷಂ, ಭಗವಂತಂ, ಶ್ರೀಮನ್ನಾರಾಯಣಂ ; ಸ್ವಾಮಿತ್ವೇನ, ಸುಹೃತ್ವೇನ, ಗುರುತ್ವೇನ, ಚ, ಪರಿಗೃಹ್ಯ !**

ಇಂತಹ ಪರಮ ಪುರುಷನಾದ, ಭಗವಂತನಾದ, ಶ್ರೀಮನ್ನಾರಾಯಣನನ್ನು, ನನ್ನ ಸ್ವಾಮಿಯೆಂದು ; ಸು–ಹೃದಯದಿಂದ ನನ್ನ ಗುರುವೆಂದು–ನಾನು–ಪರಿಭಾವಿಸಿದ್ದೇನೆ !

**5. ಐಕಾಂತಿಕ. ಆತ್ಯಂತಿಕ ತತ್ ಪಾದಾಂಬುಜ ದ್ವಯ ಪರಿಚರ್ಯೈಕ [1]ಮನೋರಥಃ**

[ಅದರೆ] ನಿನ್ನ ಎರಡು ಪಾದಾರವಿಂದಗಳಲ್ಲೂ, ಐಕಾಂತಿಕವೂ, ಆತ್ಯಂತಿಕವೂ ಆದ ; ಪರಿಚರ್ಯೆಯನ್ನು ಕೈಗೊಳ್ಳಬೇಕೆನ್ನುವ ಒಂದೇ ಮನಸ್ಸುಳ್ಳವನಾಗಿದ್ದೇನೆ !

[ ಭಗವಾನ್ ರಾಮಾನುಜರು ಒಂದು ನಿಮಿಷದ ನಂತರ ]

**6. [ ಹೇ ಶ್ರೀರಂಗನಾಥಾ ! ] ತತ್ಪ್ರಾಪ್ತ್ಯಯೇ ಚ, ತತ್ಪಾದಾಂಬುಜ ದ್ವಯ [2]ಪ್ರಪತ್ತೇಃ, ಅನ್ಯತ್ ನಮೇ ; ಕಲ್ಪಕೋಟಿ ಸಹಸ್ರೇಣ, ಅಪಿ ಸಾಧನಂ ಅಸ್ತಿ, ಇತಿ ಮನ್ವಾನಃ ;**

ನಿನ್ನ ಪರಿಚರ್ಯೆ ಮಾಡುವ ಸುಯೋಗ ಪ್ರಾಪ್ತಿಗಾಗಿ, ನಿನ್ನ ಪಾದಕಮಲ ಎರಡರಲ್ಲಿ ಪ್ರಪತ್ತಿ (ಶರಣಾಗತಿ) ಪಡೆಯುವುದೊಂದು ಬಿಟ್ಟರೆ ; ಬೇರೆ ಯಾವುದೇ ಸಾಧನವೂ ನನಗೆ.—ಕಲ್ಪಕೋಟಿ ಸಹಸ್ರಗಳಲ್ಲಿ—ಯಾವುದೂ ಇಲ್ಲವೆಂದು ನನಗೆ ಅನಿಸಿದೆ ;

**7. [ ಹೇ ಭಗವಾನ್ ! ] ತಸ್ಯ ಏವ ಭಗವತಃ ನಾರಾಯಣಸ್ಯ. ಅಖಿಲ ಸತ್ವ ದಯೈಕ ಸಾಗರಸ್ಯ, ಅನಾಲೋಚಿತ ಗುಣಾಗುಣ ಅಖಂಡ ಜನ ಅನುಕೂಲ ಅಮರ್ಯಾದಾ ಶೀಲವತಃ ;**

ನೀನು ಜಗತ್ತಿನ "ಸತ್ವ"ಕ್ಕೆ (Basic Power) ದಯಾಮಯನಾದ ಸಾಗರದಂತಿರುವೆ, ಜೀವಿಗಳ ಗುಣ ಅವಗುಣಗಳನ್ನು ವಿಮರ್ಶಿಸದೆಯೇ, ಎಲ್ಲ ಜನರಿಗೂ ಅನುಕೂಲನಾದಂತಹ, ಮೇರೆಯರಿಯದ ಶೀಲವುಳ್ಳವನು ; ಅರ್ಥಾತ್ ಎಲ್ಲರನ್ನೂ ಕೈಹಿಡಿದು ಜೀವನದ ಗುರಿ ಕಡೆ ನಡೆಸುವವನು ;

---

1. ಮನೋರಥ—ಮನಸ್ಸು ಎಂಬ ರಥ ಉಳ್ಳವನು—ಎಂದರ್ಥ. ಆತ್ಮನಿಗೆ 'ಮನಸ್ಸು' ಎಂಬುದು ಒಂದು ಸೂಕ್ಷ್ಮ ಅವಯವ—Instrument. ಯಜಮಾನನು ಹೇಳಿದ ಕಡೆ ರಥ ಹೋಗುತ್ತಿದ್ದರೆ, ರಥ ಹೋದ ಕಡೆ ಯಜಮಾನ ಹೋಗುತ್ತಿಲ್ಲ—ಎಂಬ ಭಾವ ಇಲ್ಲಿ ಅರ್ಥವಾಗಬೇಕು.

2. ಪ್ರಪತ್ತಿ—ಎಂದರೆ ಶರಣಾಗತಿ. ಪ್ರಪ್ರಥಮವಾಗಿ ಭಕ್ತಿಯೆಂಬ ಮರದಲ್ಲಿ ಶರಣಾಗತಿಯೆಂಬ ಕವಲು ಮೂಡಿದ್ದು, ರಾಮಾನುಜರ ನೂತನ ದರ್ಶನದಿಂದ. ಶರಣಾಗತಿಯು 'ಸೆಳೆ' ಸ್ಫುರಿಸಿದ್ದು ರಾಮಾನುಜರಿಗೆ—ರಾಮನಿಗೆ ವಿಭೀಷಣನ ಶರಣಾಗತಿ ಪ್ರಸಂಗದಿಂದ.

**8. [ ಹೇ ಸ್ವಾಮಿನ್ ! ] ಸ್ವಾಭಾವಿಕ ಅನವಧಿಕಾತಿಶಯ ಗುಣ ವತ್ತಯಾ ; ದೇವ, ತಿರ್ಯಙ್, ಮನುಷ್ಯಾದಿ ಅಖಿಲ ಜನ ಹೃದಯ ಆನಂದನಸ್ಯ ;**

ನೀನು ಸ್ವಾಭಾವಿಕವಾದ, ಅತಿಶಯವಾದ ಗುಣವುಳ್ಳವನಾದುದರಿಂದಲೇ– ದೇವತೆ, ಮನುಷ್ಯ, ಪ್ರಾಣಿ ಮೊದಲಾದ Super-man, Man Animal,) ಎಲ್ಲ ಜೀವಿಗಳ ಹೃದಯದಲ್ಲೂ ಆನಂದವನ್ನು ಸ್ಫುರಿಸುವವನಾಗಿದ್ದೀಯೇ :

**9. [ ಹೇ ರಂಗನಾಥಾ ! ] ಆಶ್ರಿತ ವಾತ್ಸಲ್ಯ, ಏಕ ಜಲಧೇಃ, ಭಕ್ತ ಜನ ಸಂಶ್ಲೇಷ ಏಕ ಭೋಗಸ್ಯ.**

ನೀನು ನಿನ್ನ ಆಶ್ರಿತರ ವಾತ್ಸಲ್ಯಕ್ಕೆ ಪ್ರಧಾನ ಸಾಗರದಂತಿರುವೆ, ನಿನ್ನ ಭಕ್ತ ಜನತೆಯ 'ಸಂಶ್ಲೇಷ'ವೊಂದೇ ನಿನ್ನ ಭೋಗವಾಗಿದೆ.

**10. [ ಹೇ ರಂಗಾ ! ] ನಿತ್ಯ ಜ್ಞಾನ ಕ್ರಿಯಾ ಐಶ್ವರ್ಯ ಭೋಗ ಸಾಮಗ್ರೀ ಸಮೃದ್ಧಸ್ಯ ; ಮಹಾವಿಭೂತೇಃ, ಶ್ರೀಮತ್ ಚರಣಾರವಿಂದ ಯುಗಳಂ, ಅನನ್ಯ ಆತ್ಮ ಸಂಜೀವನೇನ ತದ್ಗತ ಸರ್ವಭಾವೇನ ಶರಣಂ ಅನುವ್ರಜೇತ್.**

ಹೇ ರಂಗಾ ! ನಿನಗೆ ನಿತ್ಯವೂ ಸಹ–ಜ್ಞಾನ, ಕ್ರಿಯೆ, ಐಶ್ವರ್ಯ ಮುಂತಾದ ಭೋಗ–ಸಾಮಗ್ರಿಯುಗಳು ಸಂವೃದ್ಧವಾಗಿವೆ. ಇಂತಹ ಮಹಾ ವಿಭೂತಿಯಾದ ನಿನ್ನ ಶ್ರೀಮಂತ ಚರಣಗಳೆರಡನ್ನು ಬಿಟ್ಟರೆ, (ನನಗೆ) 'ಆತ್ಮ ಸಂಜೀವಿನಿ'ಯಾದುದು ಬೇರೆ ಯಾವುದೂ ಇಲ್ಲವೆಂದು ಭಾವಿಸಿ, ನಿನ್ನಲ್ಲೇ ಶರಣು ಬಂದಿದ್ದೇನೆ.

[ಭಗವಾನ್ ರಾಮಾನುಜರು ಸ್ವಲ್ಪ ಹೊತ್ತು ನೀರವ. ನಂತರ ಮತ್ತೆ ಏರಿಸಿದ ಧ್ವನಿಯಲ್ಲಿ ಜಗತ್ತನ್ನು ಕುರಿತು ಹೇಳುವಂತೆ.]

**11. [ ಹೇ ಸ್ವಾಮಿನ್ ! ] ತತಶ್ಚ ಪ್ರತ್ಯಹಂ ಆತ್ಮೋಜ್ಜೀವನಾಯ ಏವಂ, ಅನು ಸ್ಮರೇತ್ :—**

(ಅಲ್ಲದೆ) ಬಳಿಕ ಆತ್ಮದ ಉಜ್ಜೀವನಕ್ಕೋಸ್ಕರ (Emancipation) ಪ್ರತಿ ನಿತ್ಯ ಈ ರೀತಿ ಸ್ಮರಣೆ ಮಾಡುತ್ತಿರಬೇಕು.

[ ಇಲ್ಲಿ ರಾಮಾನುಜರಿಗೆ ಬೇರೊಂದು ಅಲೌಕಿಕ ಲೋಕದ ದರ್ಶನವಾಗುತ್ತದೆ. ಅದನ್ನು ನಮ್ಮಂತಹ ಅಂಧರಿಗೆ (ಅಂತಃಚಕ್ಷುಸ್ಸು ಇಲ್ಲದವರಿಗೆ) ನುಡಿ ಚಿತ್ರ (Pen-picture) ಚಿತ್ರಿಸುತ್ತಾರೆ.]

12. **ಚತುರ್ದಶ ಭುವನಾತ್ಮಕಂ ಅಂಡಂ ದಶಗುಣಿತ, ಉತ್ತರಂ ಚ, ಆವರಣ ಸಪ್ತಕಂ ;**

ಈ ಹದಿನಾಲ್ಕು ಲೋಕಗಳೂ ಒಂದು ಅಂಡದೊಳಗೆ ಇವೆ. ಈ ಬ್ರಹ್ಮಾಂಡದ ಸುತ್ತಲೂ, ಅದರ ಹತ್ತರಷ್ಟು ವ್ಯಾಪಕವಾಗಿ ಏಳು ಆವರಣ (ಕೋಟೆ) ಗಳಿವೆ :

13. **ಸಮಸ್ತ[3] ಕಾರ್ಯ[4] ಕಾರಣ ಜಾತಂ ಅತೀತ್ಯ ಪರಮ ವ್ಯೋಮ ಶಬ್ದ ಅಭಿಧೇಯೇ,**

ಈ ಎಲ್ಲ ಕಾರ್ಯ ಕಾರಣಗಳ ವ್ಯಾಪ್ತಿಯಿಂದ ಅತೀತವಾದ 'ಪರಮವ್ಯೋಮ' ಎಂಬ ಶಬ್ದದಿಂದ ಹೆಸರಿಸಬಹುದಾದ ಲೋಕವೊಂದಿದೆ,

14. **ಬ್ರಹ್ಮಾದೀನಾಂ ವಾಙ್ ಮನಸಾ ಅಗೋಚರೇ ಶ್ರೀಮತಿ ವೈಕುಂಠೇ ದಿವ್ಯಲೋಕೇ ;**

ಅದು ಬ್ರಹ್ಮನೇ ಮೊದಲಾದ ದೇವತೆಗಳ 'ವಾಕ್, ಮನಸ್ಸು'ಗಳಿಗೆ ವರ್ಣಿಸಲು ಅಸದಳವಾದ, ಹಾಗೂ ಅಗೋಚರ ಲೋಕವಾದ **ಶ್ರೀಮತ್ ವೈಕುಂಠ ಎಂಬ ಅಪ್ರಾಕೃತ** ದಿವ್ಯ ಲೋಕವಿದೆ !

15. **ಸನಕ ವಿಧಿ ಶಿವಾದಿಭಿಃ ಅಪಿ ಅಚಿಂತ್ಯ ಸ್ವಭಾವ ಐಶ್ವರ್ಯೈಃ, ನಿತ್ಯ ಸಿದ್ಧೈಃ, ಅನಂತೈಃ ; ಭಗವತ್ ಅನುಕೂಲ್ಯ ಏಕ ಭೋಗೈಃ, ದಿವ್ಯ ಪುರುಷೈಃ, ಮಹಾತ್ಮಭಿಃ ಆಪೂರಿತೇ ; !**

ಇಲ್ಲಿ ನಿತ್ಯ ಸಿದ್ಧರಿದ್ದಾರೆ. ಅವರ ಸ್ವಭಾವ ಮತ್ತು ಐಶ್ವರ್ಯವನ್ನು ವರ್ಣಿಸಲು ಶಿವನಿಗೂ ಶಕ್ತಿ ಸಾಲದು.

ದಿವ್ಯ ಪುರುಷರು, ಮಹಾತ್ಮರು ಇಲ್ಲಿ ತುಂಬಿದ್ದಾರೆ. ಇವರಿಗೆ 'ಭಗವದಾನುಕೂಲ್ಯ'ವೆಂಬ ಒಂದು ವಿಷಯವೇ ಅವರೆಲ್ಲರ 'ಭೋಗ'.

---

3. ಕಾರ್ಯ–Effect. 4. ಕಾರಣ–Cause. ಭಗವಂತ ಎಂಬ 'ಕಾರಣ' ಪುರುಷನಿಲ್ಲದೆ, ಬ್ರಹ್ಮಾಂಡ ಎಂಬ 'ಕಾರ್ಯ' ಸಾಧ್ಯವಿಲ್ಲ.

**16. ತೇಷಾಮಪಿ "ಇಯತ್ ಪರಿಮಾಣಂ, ಇಯತ್ ಐಶ್ವರ್ಯಂ, ಈದೃಶ ಸ್ವಭಾವಂ"–ಇತಿ ಪರಿಚ್ಛೇತ್ತು ಅಯೋಗ್ಯೇ ; !**

ಈ ದಿವ್ಯ ಪುರುಷರು ಈ ರೀತಿ ಇದ್ದಾರೆ. ಇವರ ಐಶ್ವರ್ಯ ಇಷ್ಟೇ, ಇವರ ಸ್ವಭಾವ ಇಂಥಾದ್ದೇ ಎಂದು, ತಿಳಿದುಕೊಳ್ಳುವುದಕ್ಕೇ ಸಾಧ್ಯವಿಲ್ಲ !

[ಬಾನುಲಿಯು ಬಿತ್ತರಿಸುವಂತಹ – Running Commentary 'ನುಡಿ ಚಿತ್ರ'ವನ್ನು ರಾಮಾನುಜರು ಚಿತ್ರಿಸುತ್ತಿದ್ದಾರೆ.]

**17. ದಿವ್ಯಾವರಣ ಶತ ಸಹಸ್ರ ಆವೃತೇ, ದಿವ್ಯ ಕಲ್ಪತರು ಉಪ ಶೋಭಿತೇ, ದಿವ್ಯೋದ್ಯಾನ ಶತ ಸಹಸ್ರ ಕೋಟಿಭಿಃ ಆವೃತೇ, ಅತಿಪ್ರಮಾಣೇ ದಿವ್ಯಾಯತನೇ ; !**

ಆ ದಿವ್ಯ ಲೋಕವು ಶತ–ಸಹಸ್ರ ದಿವ್ಯ ಆವರಣಗಳಿಂದ ಆವರಿಸಲ್ಪಟ್ಟಿದೆ, ಕಲ್ಪ ತರುವಿನಿಂದ ಶೋಭಿಸುತ್ತಿದೆ, ಎತ್ತ ನೋಡಿದರತ್ತ ದಿವ್ಯೋದ್ಯಾನಗಳಿಂದ ಆವರಿಸಲ್ಪ ಟ್ಟಿದೆ, (ದಿವ್ಯವೇ ಆವರಿಸಿದೆ !)

**18. ಕಸ್ಮಿಂಶ್ಚಿತ್ ವಿಚಿತ್ರ ದಿವ್ಯ ರತ್ನಮಯೇ, ದಿವ್ಯ ಆಸ್ಥಾನ ಮಂಟಪೇ, ದಿವ್ಯ ರತ್ನಸ್ತಂಭ ಶತ ಸಹಸ್ರ ಕೋಟಿಭಿಃ ಉಪ ಶೋಭಿತೇ !**

ಇಂತಹ ದಿವ್ಯ ಲೋಕದಲ್ಲಿ ಒಂದು ದಿವ್ಯವಾದ ಆಸ್ಥಾನ ಮಂಟಪವಿದೆ. ಅದನ್ನು ಅಸಂಖ್ಯ ರತ್ನಸ್ತಂಭಗಳು ಬೆಳಗುತ್ತಿವೆ !

**19. ದಿವ್ಯ ನಾನಾ ರತ್ನ ಕೃತ ಸ್ಥಲ ವಿಚಿತ್ರಿತೇ, ದಿವ್ಯ ಅಲಂಕಾರ ಅಲಂಕೃತೇ, ಪರಿತಃ ಪತಿತೈಃ ಪತಮಾನೈಃ, ಪಾದಪಸ್ಥೈಶ್ಚ ನಾನಾಗಂಧ ವರ್ಣೈಃ ದಿವ್ಯ ಪುಷ್ಪೈಃ, ಶೋಭಮಾನೈಃ ದಿವ್ಯ ಪುಷ್ಪ ಉಪ ವನೈಃ ಉಪ ಶೋಭಿತೇ ; !**

ದಿವ್ಯವಾದ ಅನೇಕ ರತ್ನಖಚಿತ ಸ್ಥಳಗಳಿಂದ ಅದು ವಿಚಿತ್ರವಾಗಿದೆ, ದಿವ್ಯಾ ಲಂಕಾರಗಳಿಂದ ಅಲಂಕೃತವಾಗಿದೆ. ಕೆಳಗೆ ಬಿದ್ದಿರುವ, ಬೀಳುತ್ತಿರುವ ಮತ್ತು ಗಿಡ ಗಳ ಮೇಲೆ ಇರುವ, ನಾನಾ ವಿಧ ಗಂಧಯುಕ್ತ, ಬಣ್ಣಬಣ್ಣದ ವರ್ಣಗಳ, ದಿವ್ಯ ಪುಷ್ಪಗಳಿಂದ ಕೂಡಿದ ಹೂ ತೋಟಗಳಿಂದ ; ಅದು ಶೋಭಿಸುತ್ತಿದೆ !

**20. ಸಂಕೀರ್ಣ ಪಾರಿಜಾತ ಆದಿ ಕಲ್ಪದ್ರುಮ ಉಪ ಶೋಭಿತ್ತೈಃ, ಅಸಂಕೀರ್ಣೈಃ ಚ ಕೈಶ್ಚಿತ್ ಅಂತಃಸ್ಥ ಪುಷ್ಪ ರತ್ನಾದಿ ನಿರ್ಮಿತ, ದಿವ್ಯ ಲೀಲಾಮಂಟಪ ಶತ ಸಹಸ್ರ ಉಪ ಶೋಭಿತ್ತೈಃ : !**

ಇಂತಹ ಮಂಟಪದ ಸುತ್ತಲೂ ನಿಬಿಡವಾದ ಪಾರಿಜಾತಾದಿ ಕಲ್ಪವೃಕ್ಷಗಳು ಶೋಭಿಸುತ್ತಿವೆ. ಬಿಡಿ ಬಿಡಿಯಾದ ಮರಗಳು ಇರುವ ಕಡೆ, ಮಧ್ಯೆ ಮಧ್ಯೆ ಅಸಂಖ್ಯ ದಿವ್ಯ ಮಂಟಪಗಳಿವೆ !

**21. ಸರ್ವದಾ ಅನುಭೂಯ ಮಾನೈಃ, ಅಪಿ ಅಪೂರ್ವವತ್ ಆಶ್ಚರ್ಯಂ ಉಪಜನಯದ್ಭಿಃ, ಕ್ರೀಡಾ ಶೈಲ ಶತ ಸಹಸ್ರೈಃ ಅಲಂಕೃತೈಃ !**

ಇವುಗಳನ್ನು ಸದಾ ಅನುಭವಿಸುತ್ತಲೇ ಇದ್ದರೂ ಸಹ, ಮತ್ತೆ ಅವು ನವ್ಯ ವೆಂದೆನಿಸುವಂತೆ ಆಶ್ಚರ್ಯಯುಕ್ತವಾಗಿವೆ ; ಅಸಂಖ್ಯ ಕ್ರೀಡಾ ಶೈಲ ತಾಣಗಳಿವೆ ! ಅವುಗಳೂ ಅಲಂಕಾರವನ್ನೇ ಹೊದೆದುಕೊಂಡಿವೆ !

**22. ಕೈಶ್ಚಿತ್ ನಾರಾಯಣ ದಿವ್ಯ ಲೀಲಾ ಅಸಾಧಾರಣೈಃ, ಕೈಶ್ಚಿತ್ ಪದ್ಮವನ ಆಲಯಾ ದಿವ್ಯಲೀಲಾ ಅಸಾಧಾರಣೈಃ ;**

ಅವುಗಳಲ್ಲಿ ಕೆಲವು 'ಶ್ರೀಮನ್ನಾರಾಯಣ'ನ ದಿವ್ಯ ಲೀಲೆಗಳಿಂದ ಅಸಾಧಾರಣ ವಾಗಿವೆ, ಕೆಲವು ಸ್ಥಳಗಳು ಅದರಿಂದ ಹೂಗಳನ್ನೇ ವನದಂತೆ ತುಂಬಿಕೊಂಡಿವೆ ; !

**23. ಸಾಧಾರಣೈಶ್ಚ ಕೈಶ್ಚಿತ್, ಶುಕ ಶಾರಿಕಾ ಮಯೂರ ಕೋಕಿಲಾ ದಿಭಿಃ, ಕೋಮಲ ಕೂಜಿತೈಃ ಆಕುಲೈಃ ; !**

ಅಲ್ಲಿ ಸಾಧಾರಣವಾಗಿ ಕಲವು ಗಿಳಿ, ಶಾರಿಕೆ, ನವಿಲು, ಕೋಗಿಲೆ ಮುಂತಾದ ಪಕ್ಷಿ ಸಂಕುಲದಿಂದ ಕೂಜಿತಗೊಂಡು ಕಲಕಲಗೊಂಡಿದೆ !

**24. ದಿವ್ಯೋದ್ಯಾನ ಶತ-ಸಹಸ್ರೈಃ ಅವೃತೇ, ಮಣಿ ಮುಕ್ತಾ ಪ್ರವಾಲ ಕೃತ ಸೋಪಾನೈಃ, ದಿವ್ಯ ಅಮಲ ಅಮೃತ ರಸ ಉದಕೈಃ !**

ಆ ಮಂಟಪದ ಸುತ್ತಲೂ ದಿವ್ಯವಾದ ಸುವಾಸನೆಯಿಂದ ಕೂಡಿದ ನೂರಾರು ಕೊಳಗಳಿವೆ ! ಮಣಿ ಮುತ್ತು ಹವಳದಿಂದ ಕೂಡಿದ ಸೋಪಾನಗಳು ಅಲ್ಲಿವೆ ! ಅಲ್ಲಿನ ನೀರು ಅಮೃತ ರಸದಂತೆ ಪರಿಶುದ್ಧವಾಗಿದೆ.

25. ದಿವ್ಯ ಅಂಡಜ ವರ್ಗೈಃ, ಅತಿ ರಮಣೀಯ ದರ್ಶನೈಃ, ಅತಿ ಮನೋಹರ ಮಧುರ ಸ್ವರೈಃ ಆಕುಲೈಃ, ಅಂತಸ್ಥ ಮುಕ್ತಾಮಯ ದಿವ್ಯ ಕ್ರೀಡಾಸ್ಥಾನ ಉಪಶೋಭಿತೈಃ, ದಿವ್ಯ ಸೌಗಂಧಿಕ ವಾಪೀ ಶತ ಸಹಸ್ರೈಃ, ದಿವ್ಯ ರಾಜಹಂಸ ಆವಲೀ ವಿರಾಜಿತೈಃ ಆವೃತೇ !

ಅಲ್ಲಿ ಶ್ರೇಷ್ಠ ಪಕ್ಷಿಗಳು ನೋಡಲು ರಮಣೀಯವಾಗಿವೆ, ಅವುಗಳ ಕೂಜನ ವಂತೂ, ವಾತಾವರಣವನ್ನು ಕಲಕಲಗೊಳಿಸಿವೆ, ಆ ಕೊಳಗಳ ಮಧ್ಯೆ ಕ್ರೀಡಾ ಸ್ಥಾನ ಗಳು ಶೋಭಿಸುತ್ತಿವೆ, ಅಲ್ಲಿ ರಾಜಹಂಸಗಳ ಹಿಂಡು ರಾರಾಜಿಸುತ್ತಿವೆ !

26. ನಿರಸ್ತ, ಅತಿಶಯ ಆನಂದ ಏಕ ರಸತಯಾ ಚ ಆನಂತ್ಯಾತ್ ಚ ಪ್ರವಿಷ್ಟಾನ್ ಉನ್ಮಾದಯದ್ಭಿಃ ಕ್ರೀಡೋದ್ದೇಶೈಃ ವಿರಾಜಿತೇ !

ಆ ದಿವ್ಯ ಮಂಟಪಗಳು ಆನಂದ ರಸವನ್ನೇ ಹೊರಸೂಸುತ್ತಿವೆ. ಅದರಿಂದ ಒಳಗೆ ಹೋದವರಿಗೆ ಆ ಕ್ರೀಡಾ ತಾಣಗಳು ಆನಂದವನ್ನೇ ಅಭಿವರ್ಷಿಸುತ್ತವೆ !

27. ತತ್ರ ತತ್ರ ಕೃತ ದಿವ್ಯ ಪರ್ಯಂಕ ಉಪ ಶೋಭಿತೇ, ನಾನಾ ಪುಷ್ಪಾಸವ ಆಸ್ವಾದ ಮತ್ತ ಭೃಂಗ ಆವಲೀಭಿಃ, ಉದ್ಗೀಯಮಾನ ದಿವ್ಯ ಗಾಂಧರ್ವೇಣ ಅಪೂರಿತೇ !

ಅಲ್ಲಲ್ಲೇ ನಿರ್ಮಿತವಾದ ಹೂ–ಹಾಸಿಗೆಗಳು ಸುಂದರವಾಗಿವೆ. ಹಲವಾರು ಪುಷ್ಪಗಳ ಆಸವವನ್ನು ಹೀರಿ, ಮದಿಸಿರುವ ದುಂಬಿಗಳ ಝೇಂಕಾರದ ದಿವ್ಯ ಗಾಯನ ದಿಂದ, ಆ ವಾತಾವರಣ ತುಂಬಿದೆ !

28. ಚಂದನ, ಅಗರು, ಕರ್ಪೂರ, ದಿವ್ಯಪುಷ್ಪ ಅವಗಾಹಿ ಮಂದಾನಿಲ ಆಸೇವ್ಯಮಾನೇ ; ಮಧ್ಯೇ ದಿವ್ಯ ಪುಷ್ಪ ಸಂಚಯ ವಿಚಿತ್ರಿತೇ, ಮಹತಿ ದಿವ್ಯ ಯೋಗ ಪರ್ಯಂಕೇ ಅನಂತ ಭೋಗಿನಿ !

(ಅಷ್ಟೇ ಅಲ್ಲ !) ಅಲ್ಲಿ ಚಂದನ, ಅಗರು, ಕರ್ಪೂರ, ದಿವ್ಯವಾದ ಪುಷ್ಪಗಳು, ಇವುಗಳ ಮೇಲೆ ಬೀಸಿ ಬರುವ ಮಂದಾನಿಲ ಮನೋಹರವಾಗಿದೆ, ಇಂತಹ ಮಂಟಪದ ಮಧ್ಯಭಾಗದಲ್ಲಿ ಅತ್ಯಂತ ಮನೋಹರವಾದ ಹಾಸಿಗೆಯಿಂದ, ಹೂ ರಾಶಿಗಳಿಂದ ರಚಿತವಾಗಿದೆ. ಅಲ್ಲಿ 'ಅನಂತ' ಎಂಬ ಸರ್ಪವೊಂದಿದೆ.

[ ಭಗವಾನ್ ರಾಮಾನುಜರು ಮತ್ತೆ ವೈಕುಂಠವನ್ನು ಏನೋ ಅಚ್ಚರಿ ಬೆರೆತ ನೋಟದಿಂದ ನೋಡುವಂತೆ ಕಾಣುತ್ತದೆ ! ವಿವಿಧ ಮೂಲೆಗಳಿಂದ ದೃಶ್ಯವನ್ನು ನೋಡಲು ದೇಹವನ್ನು ಅತ್ತ ಇತ್ತ ಬಾಗಿಸಿ ನೋಡುತ್ತಿದ್ದಾರೆ. ನಂತರ ]

29. **ಶ್ರೀಮಂತ್ ವೈಕುಂಠ ಐಶ್ವರ್ಯಾದಿ ದಿವ್ಯಲೋಕಂ, ಆತ್ಮಕಾಂತ್ಯಾ ವಿಶ್ವಂ ಆಪ್ಯಾಯಯನ್ತ್ಯಾ, ಶೇಷ ಶೇಷಾಶನ ಅಧಿಕಂ ಸರ್ವಂ ಪರಿಜನಂ ಭಗವತಃ ತತ್ತತ್ ಅವಸ್ಥಾ ಉಚಿತ ಪರಿಚರ್ಯಾಯಾಂ ಆಜ್ಞಾಪಯಂತ್ಯಾ ಶೀಲ ರೂಪ ಗುಣ ವಿಲಾಸ ಆದಿಭಿಃ ಆತ್ಮಾನುರೂಪಯಾ, ಶ್ರಿಯಾ ಸಹ ಆಸೀನಂ !**

ಆ ವೈಕುಂಠದ ಐಶ್ವರ್ಯವೇ ಮೊದಲಾದ–ದಿವ್ಯವಾದ ಪ್ರಕಾಶದಿಂದ ಕೂಡಿದ ಇಡೀ ವಿಶ್ವವನ್ನು, ತನ್ನ ಕಾಂತಿಯಿಂದ ಆಪ್ಯಾಯನಗೊಳಿಸುತ್ತಿರುವ, ಶೇಷ–ಶೇಷಾಸನ ಮುಂತಾದ ಸಕಲ ಪರಿಜನರನ್ನು ಆ ಭಗವಂತನು ತನ್ನ ಸೇವೆಗೆ ಆಜ್ಞಾಪಿಸುತ್ತಿರುವ, ಮತ್ತು ತನ್ನ ಶೀಲ, ರೂಪ, ಗುಣ, ವಿಲಾಸ ಮೊದಲಾದ ಕಲ್ಯಾಣಗುಣಗಳಿಂದ ಕೂಡಿರುವ, ಮತ್ತು ತನಗೆ ಅನುರೂಪಳಾಗಿರುವ ಆ ಶ್ರೀದೇವಿಯ ಜೊತೆಯಲ್ಲಿ ವಿರಾಜಮಾನವಾಗಿ ಕುಳಿತಿದ್ದಾನೆ !

[ ಭಗವಾನ್ ರಾಮಾನುಜರು–ಶ್ರೀ ಲಕ್ಷ್ಮೀ ಸಮೇತನಾದ ನಾರಾಯಣನನ್ನು ತಾವು ಕಂಡಂತೆಯೇ ನಮಗಾಗಿ ಈ ರೀತಿ ವಿವರಿಸುತ್ತಿದ್ದಾರೆ. ]

30. **ಪ್ರತ್ಯಗ್ರ ಉನ್ಮೀಲಿತ ಸರಸಿಜ ಸದೃಶ ನಯನ ಯುಗಳಂ, ಸ್ವಚ್ಛ ನೀಲ ಜೀಮೂತ ಸಂಕಾಶಂ ; ಅತ್ಯುಜ್ಜ್ವಲ ಪೀತ ವಾಸಸಂ, ಸ್ವಯಾ ಪ್ರಭಯಾ ಅತಿ ನಿರ್ಮಲಯಾ, ಅತಿ ಶೀತಲಯಾ, ಅತಿ ಕೋಮಲಯಾ ಸ್ವಚ್ಛ ಮಾಣಿಕ್ಯ ಆಭಯಾ ಕೃತ್ಸ್ನಂ ಜಗತ್ ಉದ್ಭಾಸಯಂತಂ ; !**

[ಆಹಾ !] ಆ ಶ್ರೀಮನ್ನಾರಾಯಣನ ಎರಡು ನೇತ್ರಗಳೂ ಆಗತಾನೆ ಅರಳಿದ ಪ್ರಾತಃಕಾಲದ ಕಮಲ ದ್ವಯಗಳಂತಿವೆ ! ಆತನಾದರೋ ಸ್ವಚ್ಛ ನೀಲ ಮೇಘದಂತಿದ್ದಾನೆ ! ಅತಿ ನಿರ್ಮಲ, ಶೀತಲ, ಕೋಮಲವಾದ ಸ್ವಚ್ಛ ಮಾಣಿಕ್ಯದಂತೆ ಹೊಳೆಯುತ್ತಿರುವ ತನ್ನ ಪ್ರಭಾ ಮಂಡಲದ ಮಧ್ಯೆ ಜಗತ್ತನ್ನು ಬೆಳಗುತ್ತಿದ್ದಾನೆ !

31. **ಅಚಿಂತ್ಯ ದಿವ್ಯ ಅದ್ಭುತ ನಿತ್ಯ ಯೌವನ ಸ್ವಭಾವ ಲಾವಣ್ಯ ಮಯ ಅಮೃತ ಸಾಗರಂ ; ಅತಿ ಸೌಕುಮಾರ್ಯಾತ್ ಈಷತ್ ಪ್ರಸ್ವಿನ್ನವತ್ ಆಲಕ್ಷ್ಯಮಾಣ ಲಲಾಟ ಫಲಕ ದಿವ್ಯ ಅಲಕಾವಲೀ ವಿರಾಜಿತಂ ; ಪ್ರಬುದ್ಧ ಮುಗ್ಧಾಂಬುಜ ಚಾರು ಲೋಚನಂ ; ಸವಿಭ್ರಮ ಭ್ರೂಲತಂ, ಉಜ್ವಲ ಅಧರಂ, ಶುಚಿ ಸ್ಮಿತಂ, ಕೋಮಲ ಗಣ್ಡಂ, ಉನ್ನಸಂ, ಉದಗ್ರ ಪೀನಾಂಸ ವಿಲಂಬಿ ಕುಂಡಲ ಆಲಕಾವಲೀ ಬಂಧುರ ಕಂಬು ಕಂಧರಂ ; !**

[ನೋಡಿ, ನೋಡಿ !] ಆ ಶ್ರೀಮನ್ನಾರಾಯಣನು ಅಚಿಂತ್ಯನು. ಆತನು ದಿವ್ಯವೂ ಅದ್ಭುತವೂ ನಿತ್ಯವೂ ಆದ ಯೌವನವುಳ್ಳವನು, ಆತನು ಲಾವಣ್ಯ ಸ್ವಭಾವ ಮಯವಾದ ಅಮೃತದ ಸಾಗರನು ; ಆತನ ದೇಹ ಅತ್ಯಂತ ಸೌಕುಮಾರ್ಯದಿಂದ ಕೂಡಿದೆ, ಆತನ ವಿಶಾಲ ಹಣೆಯಲ್ಲಿ ನಸು ಬೆವರು ಮೂಡಿದೆ, ಮುಖ ಮಂಡಲ ಮುಂಗುರುಳ ಸಾಲಿನಿಂದ ವಿರಾಜಿಸುತ್ತಿದೆ. ಅವನ ಮೋಹಕವಾದ ಮಾಟವಾದ ಕಣ್ಣುಗಳು ವಿಕಸಿತ ಕಮಲದಂತಿವೆ, ಹುಬ್ಬುಗಳು ಬಳ್ಳಿಯಂತೆ ಬಾಗಿವೆ. ಹೊಳೆ ಯುವ ತುಟಿಗಳು, ಆತನ ಮೆಲುನಗು, ಎತ್ತರವಾದ ತುಂಬಿದ ಭುಜಗಳ ಮೇಲೆ ತೂಗಾಡುತ್ತಿರುವ ಕರ್ಣಕುಂಡಲಗಳು, ಕೇಶಪಾಶಗಳು, ಶಂಖದ ಹೊರಮೈನಂತಿ ರುವ ಕತ್ತು–ಇತ್ಯಾದಿಗಳಿಂದ ಸುಂದರವಾಗಿದ್ದಾನೆ !

32. **ಪ್ರಿಯಾ ಅವತಂಸ ಉತ್ಪಲ ಕರ್ಣ ಭೂಷಣ ಶ್ಲಥ ಅಲಕಾಬಂಧ ವಿಮರ್ದ ಶಂಸಿಭಿಃ, ಚತುರ್ಭಿಃ, ಆಜಾನು ವಿಲಂಬಿಭಿಃ ಭುಜೈಃ ವಿರಾಜಿತಂ; ಅತಿ ಕೋಮಲ ದಿವ್ಯರೇಖಾ ಅಲಂಕೃತ ಆತಾಮ್ರ ಕರತಲಂ, ದಿವ್ಯ ಅಂಗುಲೀಯಕ ವಿರಾಜಿತಂ, ಅತಿ ಕೋಮಲ ದಿವ್ಯ ನಖಾವಲೀ ವಿರಾಜಿತ ಅತಿ ರಕ್ತ ಅಂಗುಲೀಭಿಃ ಅಲಂಕೃತಂ; !**

[ಮತ್ತೆ ಕೇಳಿರಿ !] ತನ್ನ ಪ್ರಿಯಳಾದ ಶ್ರೀ ಲಕ್ಷ್ಮಿಯ ಕೊರಳಮಾಲೆ, ಕನ್ನೈದಿಲೆಯ ಕರ್ಣಭೂಷಣ, ಆ ಬಿಚ್ಚಿಹೋದ ಹೆರಳು—ಅವುಗಳು ತೋರುತ್ತಿರುವ ಸ್ಪರ್ಶ ಮತ್ತು ಆತನ ನಾಲ್ಕು ಉದ್ದವಾದ ತೋಳುಗಳು, ನೋಡಲು ಮನೋಹರ ವಾಗಿವೆ ; ಕೋಮಲವಾದ ದಿವ್ಯ ರೇಖೆಗಳಿಂದ ಅಲಂಕೃತವಾದ ಆತನ ಕೈಗಳು ನಸು ಕೆಂಪಗಿವೆ ; ಅವನು ತನ್ನ ದಿವ್ಯ ಉಗುರುಗಳಿಂದ ಹೊಳೆಯುತ್ತಿದ್ದಾನೆ. ಅತಿ ಕೋಮಲವಾದ ಉಗುರುಗಳ ಸಾಲಿನಿಂದಲೂ, ಕೆಂಪಡರಿದ ಬೆರಳುಗಳಿಂದಲೂ, ಶೋಭಿಸುತ್ತಿದ್ದಾನೆ !

33. **ತತ್ ಕ್ಷಣ ಉನ್ಮೀಲಿತ ಪುಂಡರೀಕ ಸದೃಶ ಚರಣ ಯುಗಲಂ, ಅತಿ ಮನೋಹರ ಕಿರೀಟ ಮಕುಟ ಚೂಡಾ ಅವತಂಸ ಮಕರ ಕುಂಡಲ ಗ್ರೈವೇಯಕ ಹಾರ ಕೇಯೂರ ಕಟಕ ಶ್ರೀವತ್ಸ ಕೌಸ್ತುಭ ಮುಕ್ತಾದಾಮ, ಉದರ ಬಂಧನ, ಪೀತಾಂಬರ, ಕಾಂಚೀಗುಣ, ನೂಪುರ ಆದಿಭಿಃ, ಅತ್ಯಂತ ಸುಖ ಸ್ಪರ್ಶೈಃ, ದಿವ್ಯಗಂಧೈಃ ಭೂಷಣೈಃ ಭೂಷಿತಂ; !**

[ಅಷ್ಟೇ ಅಲ್ಲ !] ಆತನು–ಈಗತಾನೆ ವಿಕಸಿತ ಪುಂಡರೀಕಗಳಂತೆ ಕಾಣುವ ಚರಣ ಯುಗಳವನ್ನು ಹೊಂದಿದ್ದಾನೆ, ಅತ್ಯಂತ ಸುಖಸ್ಪರ್ಶ, ದಿವ್ಯ ಸುಗಂಧದಿಂದ

ಕೂಡಿದ ಅತಿ ಮನೋಹರವಾದ ಕಿರೀಟ, ನೂಪುರ ಮುಂತಾದ ಭೂಷಣಗಳಿಂದ ಭೂಷಿತನಾಗಿದ್ದಾನೆ !

34. **ಶ್ರೀಮತ್ಯಾ ವೈಜಯಂತ್ಯಾ ವನಮಾಲಯಾ ವಿರಾಜಿತಂ, ಶಂಖ, ಚಕ್ರ, ಗದಾ, ಅಸಿ, ಶಾರ್ಙ್ಗಾದಿ ದಿವ್ಯಾಯುಧೈಃ ಸೇವ್ಯಮಾನಂ ; :**

[ ಹಾಗೆಯೇ ! ] ಶ್ರೀ ವೈಜಯಂತೀ ವನಮಾಲೆಯಿಂದ ರಾರಾಜಿಸುತ್ತಿದ್ದಾನೆ. ಆತನು ಶಂಖ, ಚಕ್ರ, ಗದಾ, ಖಡ್ಗ, ಬಿಲ್ಲು ಮುಂತಾದ ದಿವ್ಯಾಯುಧಗಳಿಂದ ಸೇವಿಸಲ್ಪಡುತ್ತಿದ್ದಾನೆ !

[ ಅಲ್ಲಿನ ದಿವ್ಯ ಸೂರಿಗಳ ಬಗೆಗೆ ]

35. **ಸ್ವ ಸಂಕಲ್ಪ ಮಾತ್ರ ಅವಕ್ಲೃಪ್ತ ಜಗಜ್ಜನ್ಮ ಸ್ಥಿತಿ ಧ್ವಂಸಾದಿಕೇ, ಶ್ರೀಮತಿ ವಿಷ್ವಕ್ಸೇನೇ ನ್ಯಸ್ತ ಸಮಸ್ತ ಆತ್ಮೈಶ್ವರ್ಯಂ, ವೈನತೇಯಾದಿಭಿಃ ಸ್ವಭಾವತಃ ನಿರಸ್ತ ಸಮಸ್ತ ಸಾಂಸಾರಿಕ–ಸ್ವಭಾವೈಃ ಭಗವತ್ ಪರಿಚರ್ಯಾ ಕರಣ ಯೋಗ್ಯೈಃ, ಭಗವತ್ ಪರಿಚರ್ಯೈಕ ಭೋಗೈಃ ನಿತ್ಯಸಿದ್ಧೈಃ, ಅಸಂಖ್ಯೈಃ ಯಥಾಯೋಗಂ ಸೇವ್ಯಮಾನಂ; !**

ಈ ವಿಶ್ವದ–ಜನನ, ಇರುವಿಕೆ, ಅಳಿಯುವಿಕೆ–ಮುಂತಾದವುಗಳಿಗಾಗಿ ತನ್ನ ಸಂಕಲ್ಪದಿಂದಲೇ ನಿಯಮಿಸಿದ್ದಾನೆ. ತನ್ನ ಐಶ್ವರ್ಯವನ್ನೆಲ್ಲಾ ವಿಷ್ವಕ್ಸೇನನಲ್ಲಿ ನ್ಯಾಸವಾಗಿ ಇಟ್ಟಿದ್ದಾನೆ. ವೈನತೇಯನೇ ಮೊದಲಾದ ನಿತ್ಯರು, ಸಿದ್ಧರು, ಸ್ವಾಭಾವಿಕವಾಗಿ ಸಂಸಾರದ ಸ್ವಭಾವವನ್ನು ಹೋಗಲಾಡಿಸಿಕೊಂಡಿದ್ದಾರೆ. ಆದ್ದರಿಂದ ಭಗವಂತನ ಸೇವೆಗೆ ಯೋಗ್ಯತೆ ಪ್ರಾಪ್ತ ಮಾಡಿಕೊಂಡಿದ್ದಾರೆ. ಆತನ ಸೇವೆಯೇ ಅವರಿಗೆಲ್ಲಾ ಭೋಗ ! ಅಂತಹ ನಿತ್ಯ ಸಿದ್ಧ ಸೂರಿಗಳಿಂದ, ಸನ್ನಿವೇಶಕ್ಕೆ ತಕ್ಕಂತೆ ಅವರಿಂದ ಸೇವೆ ಪಡೆಯುತ್ತಿದ್ದಾನೆ !

36. **ಆತ್ಮ ಭೋಗೇನ ಅನನುಸಂಹಿತ ಪರ ಆದಿ ಕಾಲಂ, ದಿವ್ಯ ಅಮಲ ಕೋಮಲ ಅವಲೋಕನೇನ ವಿಶ್ವಂ ಆಹ್ಲಾದಯಂತಂ; !**

ಶ್ರೀಮನ್ನಾರಾಯಣನಲ್ಲಿ—ಆತ್ಮ ಭೋಗದಿಂದ 'ಪರ' ಮುಂತಾದ ಕಾಲವು ಸೇರುವುದಿಲ್ಲ. ಆತನು ತನ್ನ ದಿವ್ಯ, ಅಮಲ, ಕೋಮಲವಾದ ದೃಷ್ಟಿಯಿಂದ ಇಡೀ ವಿಶ್ವವನ್ನು ಆಹ್ಲಾದಗೊಳಿಸುತ್ತಿದ್ದಾನೆ !

37. **ಈಷತ್ ಉನ್ಮೀಲಿತ ಮುಖಾಂಬುಜ ಉದರ ವಿನಿರ್ಗತೇನ ದಿವ್ಯ ಆನನ ಅರವಿಂದ ಶೋಭಾ ಜನನೇನ ದಿವ್ಯ ಗಾಂಭೀರ್ಯ, ಔದಾರ್ಯ, ಸೌಂದರ್ಯ, ಮಾಧುರ್ಯ, ಆದಿ ಅನವಧಿಕ ಗುಣಗಣ ವಿಭೂಷಿತೇನ, ಅತಿ ಮನೋಹರ ದಿವ್ಯಭಾವ ಗರ್ಭೇಣ ; ದಿವ್ಯಲೀಲಾ ಆಲಾಪ ಅಮೃತೇನ, ಅಖಿಲ ಜನ ಹೃದಯ ಅಂತರಾಣಿ ಆಪೂರಯಂತಂ !**

ಅವನ ಲೀಲಾ ಆಲಾಪವು ಅವನ ಉನ್ಮೀಲಿತ ಮುಖ ಕಮಲದಿಂದ (ನಸು ತೆರೆದ) ಹೊರಹೊಂಟು, ಅವನ ಮುಖಾರವಿಂದಕ್ಕೆ ಶೋಭೆಯನ್ನು ತಂದಿದೆ. ಆತನ ಗಾಂಭೀರ್ಯ, ಔದಾರ್ಯ, ಸೌಂದರ್ಯ, ಮಾಧುರ್ಯ ಮೊದಲಾದ ಗುಣಗಳಿಂದ ಅವನು ವಿಭೂಷಿತನಾಗಿದ್ದಾನೆ. ಅತಿ ಮನೋಹರವಾದ ಭಾವಗಳಿಂದ ಗರ್ಭಿತ ನಾಗಿದ್ದಾನೆ. ಅಂತಹ ದಿವ್ಯವಾದ ಆಲಾಪನಾ ರೂಪವಾದ ಅಮೃತದಿಂದ, ಅವನು ಎಲ್ಲರ ಹೃದಯದ ಅಂತರಾಳದಲ್ಲಿ ತುಂಬಿಕೊಂಡಿದ್ದಾನೆ.

[ಹಾಗಿರುವುದರಿಂದ ಈ ಭೂಲೋಕದಲ್ಲಿರುವ ನಾವು–ತನ್ನ ಸುತ್ತಲಿನ ಭಕ್ತ ರನ್ನು ಕುರಿತು—ರಾಮಾನುಜರು : ]

38. **ಭಗವಂತಂ ನಾರಾಯಣಂ, ಧ್ಯಾನ ಯೋಗೇನ ದೃಷ್ಟ್ವಾ ; ತತಃ ಭಗವತಃ ನಿತ್ಯಸ್ವಾಮ್ಯಂ, ಆತ್ಮನಃ ನಿತ್ಯದಾಸ್ಯಂ ಚ ಯಥಾ ಆವಸ್ಥಿತಂ ಅನುಸಂಧಾಯ :—**

ಈ ರೀತಿ ನಾನು (ರಾಮಾನುಜರು) ಶ್ರೀಮನ್ನಾರಾಯಣನನ್ನು ಧ್ಯಾನ ಯೋಗ ದಿಂದ ಸಂದರ್ಶಿಸಿಕೊಂಡೆನು ;

ನಂತರ (ನೀವು) ಭಗವಂತನ ನಿತ್ಯ ಸ್ವಾಮ್ಯವನ್ನೂ, ಆತನ ನಿತ್ಯ ದಾಸ್ಯವನ್ನು ಎರಡು ಮಾತಿಲ್ಲದೆ ಒಪ್ಪಿಕೊಳ್ಳಿರಿ ! ಮತ್ತು ಆತನನ್ನೇ ಹೊಂದಲು ಅನುಸಂಧಾನ ಮಾಡಿರಿ :

39. **[ ಹೇ ಮಮ ಭಕ್ತಾಃ ಶೃಣು ] "ಕದಾ ಅಹಂ, ಭಗವಂತಂ, ನಾರಾಯಣಂ, ಮಮ ಕುಲನಾಥಂ, ಮಮ ಕುಲದೈವತಂ, ಮಮ ಕುಲಧನಂ, ಮಮ ಭೋಗ್ಯಂ, ಮಮ ಮಾತರಂ, ಮಮ ಪಿತರಂ, ಮಮ ಸರ್ವಂ, ಸಾಕ್ಷಾತ್ ಕರವಾಣಿ ಚಕ್ಷುಷಾ" ?**

**"ಕದಾ ಅಹಂ ಭಗವತ್ ಪಾದಾಂಬುಜ ದ್ವಯಂ ಶಿರಸಾ ಸಂಗ್ರಹಿಷ್ಯಾಮಿ" ?**

ನಾನು ಯಾವಾಗ ನನ್ನ ಭಗವಂತನಾದ ಆ ನಾರಾಯಣನನ್ನು; ನನ್ನ ಕುಲ ನಾಥ, ಕುಲದೈವ, ಕುಲಧನ, ಭೋಗ್ಯವಸ್ತು ; ನನ್ನ ತಾಯಿ. ತಂದೆ, ಸರ್ವಸ್ವವನ್ನು ಎಂದು–ಈ ಕಣ್ಣುಗಳಿಂದ ಸಾಕ್ಷಾತ್ಕರಿಸಿಕೊಂಡೇನು ?

40. **"ಕದಾ ಅಹಂ ಭಗವತ್ ಪಾದಾಂಬುಜ ದ್ವಯ ಪರಿಚರ್ಯಾ ಆಶಯಾ ನಿರಸ್ತ ಸಮಸ್ತ ಇತರ ಭೋಗಾಶಃ. ಅಪಗತ ಸಮಸ್ತ ಸಾಂಸಾರಿಕ ಸ್ವಭಾವಃ, ತತ್ ಪಾದಾಂಬುಜ ದ್ವಯಂ ಪ್ರವೇಕ್ಷ್ಯಾಮಿ?"**

ಎಂದು ನಾನು **ಆತನ** ಅಡಿದಾವರೆಗಳನ್ನು ನನ್ನ ತಲೆಯಲ್ಲಿ ಧರಿಸೇನು ? ಎಂದು ನಾನು ಆತನಿಗೆ ಪರಿಚರ್ಯೆ ಮಾಡಲು ಇತರ (ಲೌಕಿಕ) ಆಶೆಗಳನ್ನು ಬಿಟ್ಟು ಎಲ್ಲ ಸಾಂಸಾರಿಕ ಸ್ವಭಾವಗಳನ್ನು ಬದಿಗೊತ್ತಿ, ಆತನ ಪಾದಾರವಿಂದಗಳನ್ನು ಸೇರೇನು ?

41. **"ಕದಾ ಅಹಂ ಭಗವತ್ ಪಾದಾಂಬುಜ ದ್ವಯ ಪರಿಚರ್ಯಾ ಕರಣ ಯೋಗ್ಯಃ, ತದೇಕ ಭೋಗಃ. ತತ್ ಪಾದೌ ಪರಿಚರಿಷ್ಯಾಮಿ" ?**

ಎಂದು ನಾನು **ಆತನ** ಪರಿಚರ್ಯೆ ಮಾಡಲು ಯೋಗ್ಯನಾಗಿ, ಆತನ 'ಪರಿಚರ್ಯೆ'ಯೊಂದೇ(ನನ್ನ) 'ಭೋಗ'ವುಳ್ಳವನಾಗಿ, ಆತನ ಪಾದಸೇವೆ ಮಾಡಿಯೇನು?

42. **"ಕದಾ ಮಾಂ ಭಗವಾನ್ ಸ್ವಕೀಯಯಾ ಅತಿ ಶೀತಲಯಾ ದೃಶಾ ಅವಲೋಕ್ಯ, ಸ್ನಿಗ್ಧ ಗಂಭೀರ ಮಧುರಯಾ ಗಿರಾ ಪರಿಚರ್ಯಾಯಾಂ ಆಜ್ಞಾಪಯಿಷ್ಯತಿ" ?**

ಎಂದು ಆತನು ತನ್ನ ಶೀತಲ ನೋಟದಿಂದ (ಕನಿಕರಿಸಿ) ನನ್ನನ್ನು ನೋಡಿ : –ಸ್ನಿಗ್ಧವೂ, ಗಂಭೀರವೂ, ಮಧುರವೂ ಆದ ಮಾತಿನಿಂದ (ನನ್ನನ್ನು ಕರೆದು)–ತನ್ನ ಸೇವೆಗೆ ನನ್ನನ್ನು ಆಜ್ಞಾಪಿಸಿಯಾನು ?

43. **ಇತಿ ಭಗವತ್ ಪರಿಚರ್ಯಾಯಾಂ ಆಶಾಂ ವರ್ಧಯಿತ್ವಾ ತಯಾ ಏವ ಆಶಯಾ, ತತ್ ಪ್ರಸಾದ ಉಪಬೃಂಹಿತಯಾ ಭಗವಂತಂ ಉಪೇತ್ಯ, ದೂರಾದೇವ ಭಗವಂತಂ ಶೇಷಭೋಗೇ ಶ್ರಿಯಾ ಸಹ ಆಸೀನಂ ;**

ಈ ರೀತಿ **ಆತನ** ಸೇವೆಯಲ್ಲಿ ನನ್ನ ಆಶೆಯನ್ನು ಬೆಳಸಿಕೊಂಡು, ಆತನ ಪ್ರಸಾದ ದಿಂದಲೇ ಉಪ–ಬೃಂಹಿತವಾದ, ಮತ್ತು ಅದೇ ಮಹತ್ತರವಾದ ಆಶೆಯಿಂದ ಭಗವಂತ ನನ್ನು ಸಮೀಪಿಸುತ್ತಾ, ಶೇಷ ಭೋಗದಲ್ಲಿ ಶ್ರೀ ಮಹಾಲಕ್ಷ್ಮಿಯೊಡನೆ ಕುಳಿತು ;

44. ವೈನತೇಯ ಆದಿಭಿಃ ಸೇವ್ಯಮಾನಂ; "ಸಮಸ್ತ ಪರಿವಾರಾಯ ಶ್ರೀಮತೇ ನಾರಾಯಣಾಯ ನಮಃ"—ಇತಿ ಪ್ರಣಮ್ಯ, ಉತ್ಥಾಯ ಉತ್ಥಾಯ, ಪುನಃ ಪುನಃ ಪ್ರಣಮ್ಯ;

ಗರುಡ ಮುಂತಾದವರಿಂದ ಸೇವಿಸಲ್ಪಡುತ್ತಿರುವ ಆತನನ್ನು, ದೂರದಿಂದಲೇ "ಸಮಸ್ತ ಪರಿವಾರದಿಂದ ಕೂಡಿರುವ ಶ್ರೀಮನ್ನಾರಾಯಣನಿಗೆ ನಮಸ್ಕಾರ" ಎಂದು ಪ್ರಣಾಮ ಮಾಡಿ, ಮತ್ತೆ ಮತ್ತೆ ಎದ್ದು, ಪ್ರಣಾಮ ಮಾಡಿ,

45. ಅತ್ಯಂತ ಸಾಧ್ವಸ ವಿನಯ ಅವನತಃ ಭೂತ್ವಾ, ಭಗವತ್ ಪಾರಿಷದ ಗಣ ನಾಯಕೈಃ, ದ್ವಾರಪಾಲೈಃ, ಕೃಪಯಾ ಸ್ನೇಹ ಗರ್ಭಯಾ ದೃಶಾ ಅವಲೋಕಿತಃ; !

ಅತ್ಯಂತ ವಿನಯ, ಭಯ ಭಕ್ತಿಗಳಿಂದ ನೀನು ತಲೆಬಾಗಿದ್ದರೆ: (ರಾಮಾನುಜರು ಸುತ್ತ ನೆರೆದಿದ್ದ ಜನರನ್ನು ಕುರಿತು) ಭಗವಂತನ ಪಾರಿಷದ ಗಣನಾಯಕರಾದ ಅಲ್ಲಿನ ದ್ವಾರಪಾಲಕರು ನಮ್ಮನ್ನು (ನಿನ್ನನ್ನು ಸಹ) ಅತ್ಯಂತ ಸ್ನೇಹ ಕರುಣೆ ದಯಾರ್ದ್ರ ಹೃದಯದಿಂದ ನೋಡುತ್ತಾರೆ !

46. ಸಮ್ಯಕ್ ಅಭಿವಂದಿತೈಃ, ತೈಃ, ತೈಃ, ಏವ ಅನುಮತಃ ಭಗವಂತಂ ಉಪೇತ್ಯ ಶ್ರೀಮತಾ ಮೂಲಮಂತ್ರೇಣ—"ಮಾಂ ಐಕಾಂತಿಕ ಆತ್ಯಂತಿಕ ಪರಿಚರ್ಯಾ ಕರಣಾಯ ಪರಿಗೃಹ್ಣೀಷ್ವ" — ಇತಿ ಯಾಚಮಾನಃ ಪ್ರಣಮ್ಯ, ಆತ್ಮಾನಂ ಭಗತೇ ನಿವೇದಯೇತ್ !

ಆಗ ಅವರನ್ನು (ದ್ವಾರಪಾಲಕರನ್ನೂ) ಚೆನ್ನಾಗಿ ಅಭಿವಂದಿಸಿ, ಅವರ ಅಪ್ಪಣೆ ಪಡೆದು, ಭಗವಂತನ ಬಳಿಗೆ ಹೋಗಿ, ಶ್ರೀಮನ್ ಮೂಲ ಮಂತ್ರದಿಂದ "ಹೇ ಭಗವಂತನೇ, ಐಕಾಂತಿಕವು, ಆತ್ಯಂತಿಕವು ಆದ ನಿನ್ನ ಸೇವೆಗೆ ನನ್ನನ್ನು ಸ್ವೀಕರಿಸು" ಎಂದು ಬೇಡಿಕೊಳ್ಳುತ್ತಾ, ಪ್ರಣಾಮ ಮಾಡುತ್ತಾ (ನೀವು) ತನ್ನನ್ನು ತಾನು ಭಗವಂತನಿಗೆ ಅರ್ಪಿಸಿಕೊಳ್ಳಬೇಕು !

[ ಭಗವಾನ್ ರಾಮಾನುಜರು ಸ್ವಲ್ಪ ಹೊತ್ತು ನೀರವ. ಸ್ವಲ್ಪ ಹೊತ್ತಿನ ನಂತರ, ಸಮಾಧಾನದ ಧ್ವನಿಯಲ್ಲಿ ಸುತ್ತಮುತ್ತ ನೆರೆದಿದ್ದ ಭಕ್ತ ಬಳಗವನ್ನುದ್ದೇಶಿಸಿ]

47. ತತಃ ಭಗವತಾ ಸ್ವಯಂ, ಏವ ಆತ್ಮ ಸಂಜೀವನೇನ, ಅಮರ್ಯಾದಾ ಶೀಲವತಾ, ಅತಿ ಪ್ರೇಮಾನ್ವಿತೇನ, ಅವಲೋಕನೇನ,

ಅವಲೋಕ್ಯ; ಸರ್ವದೇಶ, ಸರ್ವಕಾಲ, ಸರ್ವಾವಸ್ಥಾ ಉಚಿತ ಅತ್ಯಂತ ಶೇಷ ಭಾವಾಯ ಸ್ವೀಕೃತಃ ಅನುಜ್ಞಾ ಶ್ಚ; ಅತ್ಯಂತ ಸಾಧ್ವಸ ವಿನಯ ಅವನತಃ ಕಿಂಕುರ್ವಾಣಃ, ಕೃತ ಅಂಜಲಿ ಪುಟಃ ಭಗವಂತಂ ಉಪಾಸೀತ!

ಆ ಭಗವಂತನು ಸ್ವಯಂ ಆತ್ಮ ಸಂಜೀವಿನಿಯಂತಹವನು. ಯಾವುದರ ಪರಿ ಮಿತಿಗೂ ಒಳಗಾಗದವನು. ಅಂತಹವನು ನಮ್ಮನ್ನು ಪ್ರೇಮ ಕಟಾಕ್ಷದಿಂದ ನೋಡಿ ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಿಗೂ ಯೋಗ್ಯನಾದ, ಅತ್ಯಂತ ಶೇಷಭಾವ ಕ್ಯೋಗ್ಯರ (ನಮ್ಮನ್ನು) ಸ್ವೀಕರಿಸುತ್ತಾನೆ. (ಆದ್ದರಿಂದ) ಆಗ ಅವನ ಅನುಜ್ಞೆ ಯಂತೆ ನಾವು ಭಯಭಕ್ತಿ, ವಿನಯದಿಂದ–ಅವನತವಾಗಿ ಅವನಿಗಾಗಿ ಏನು ಮಾಡು ವುದಕ್ಕೂ ಸಿದ್ಧವಾಗಿ, ಮುಗಿದ ಕೈ ಸಹಿತ ಸಿದ್ಧವಾಗಿ ಆತನ ಬಳಿ ಇರಬೇಕು !

[ ಅತ್ಯಂತ ಸಮಾಧಾನ ಸ್ಥಿತಿಯಲ್ಲಿ ಭಗವಾನ್ ರಾಮಾನುಜರು ]

48. ತತಶ್ಚ ಅನುಭೂಯಮಾನ ಭಾವ ವಿಶೇಷಃ, ನಿರತಿಶಯ ಪ್ರೀತ್ಯಾ ಅನ್ಯತ್ ಕಿಂಚಿತ್ ಕರ್ತುಂ ದ್ರಷ್ಟುಂ ಸ್ಮರ್ತುಂ ಅಶಕ್ತಃ ; !

ನಂತರ ಆತನ ಸಾನ್ನಿಧ್ಯ—ಭಾವ ವಿಶೇಷವನ್ನು ಅನುಭವಿಸುತ್ತಾ, ಅನ್ಯ ಚಿಂತನೆ, ವೀಕ್ಷಣೆ ಬಿಟ್ಟು,

49. ಪುನರಪಿ ಶೇಷ ಭಾವಂ ಏವ ಯಾಚಮಾನಃ, ಭಗವಂತಂ ಏವ ಅವಿಚ್ಛಿನ್ನ ಸ್ರೋತೋ ರೂಪೇಣ ಅವಲೋಕನೇನ ಅವಲೋಕಯನ್ ಆಸೀತ !

ಮತ್ತೆ ಆತನನ್ನೇ 'ಶೇಷ' ಭಾವನೆಯಿಂದ ಪ್ರಾರ್ಥಿಸುತ್ತಾ, ನಿತ್ಯ ನಿರಂತರ ಆತನನ್ನೇ ನೋಡುತ್ತಿರಬೇಕು !

[ ಭಗವಾನ್ ರಾಮಾನುಜರು ಸುತ್ತಮುತ್ತ ಕಾತರವಾಗಿ ಕೇಳುತ್ತಿದ್ದವರನ್ನು ಕರುಣೆಯಿಂದ ನೋಡುತ್ತಾ, ಅತ್ಯಂತ ಮೆಲುದನಿಯಲ್ಲಿ ]

50. ತತಃ ಭಗವತಾ ಸ್ವಯಂ ಏವ ಆತ್ಮ ಸಂಜೀವನೇನ ಅವಲೋಕ ನೇನ ಅವಲೋಕ್ಯ; ಸಸ್ಮಿತಂ ಆಹೂಯ, ಸಮಸ್ತ ಕ್ಲೇಶಾಪಹಂ ನಿರತಿಶಯ ಸುಖ ಆವಹಂ, ಆತ್ಮೀಯಂ ಶ್ರೀಮತ್ ಪಾದಾರವಿಂದ ಯುಗಲಂ ಶಿರಸಿ ಕೃತಂ ಧ್ಯಾತ್ವಾ, ಅಮೃತ ಸಾಗರ ಅಂತಃ ನಿಮಗ್ನ, ಸರ್ವ ಅವಯವ ಸುಖಂ ಆಸೀತ !

ಆಗ ಭಗವಂತನು (ಸ್ವಯಂ ಸಂಜೀವಿ) ತನ್ನ ದೃಷ್ಟಿಯಿಂದ ಮೆಲುನಗೆಯೊಡನೆ ನಮ್ಮನ್ನು ಹತ್ತಿರಕ್ಕೆ ಕರೆದು, ಸಮಸ್ತ ಕ್ಲೇಶಗಳನ್ನು ನಿವಾರಿಸುವ, ನಿರತಿಶಯವಾದ ಸುಖವನ್ನು ಕೊಡುತ್ತಾನೆ, [ನಾವು] ಆತನ ಶ್ರೀಮತ್ ಪಾದಾರ ಯುಗಗಳನ್ನು ಧ್ಯಾನಿಸಿ, ಅವನ ಕೃಪೆಯೆಂಬ ಅಮೃತ ಸಾಗರದೊಳಗೆ ಮುಳುಗಿ ಸುಖವಾಗಿರಬೇಕು.

[ಉಪಕಾರ ಸ್ಮರಣೆ : ಅಚ್ಯುತಃ ಪ್ರೀಯತಾಮ್]

[ಈ ಕೃತಿ ಪ್ರಕಾಶನಕ್ಕೆ ಇವರುಗಳು ದಾನ ನೀಡಿದ್ದಾರೆ]

1. ಶ್ರೀಮತಿ ಸರೋಜಾ ನಾರಾಯಣ್, ತುಮಕೂರು. ರೂ. 30–00
2. ಶ್ರೀಮತಿ ಸೌಭಾಗ್ಯಮ್ಮ ನಾರಾಯಣ ಜೀಯರ್ ,, ರೂ. 30–00
3. ಶ್ರೀಮತಿ ಶಕುಂತಳಾ ಪದ್ಮನಾಭನ್, ತುಮಕೂರು ರೂ. 25–00
4. ಶ್ರೀಮತಿ ವಿನುತಾ ಶ್ರೀನಿವಾಸನ್, ಔರಂಗಾಬಾದ್ ರೂ. 50–00
5. ಶ್ರೀಮತಿ ಅನಸೂಯ ದೊರೆಸ್ವಾಮಿ, ಬಸವನಗುಡಿ, ಬೆಂಗಳೂರು. ರೂ. 15–00

---

ಜೀವ ಜಗತ್ ಜಗದೊಡೆಯನ ಪಾರಸ್ಪರಿಕ ಸಂಬಂಧವನ್ನು ತಿಳಿಸುವ ಜ್ಞಾನವೇ–ವೇದಾಂತ. —ಸಂಪಾದಕ

ಹತ್ತು ರೂ ದಾನ ನೀಡಿ ಸ್ಥಳ ದಾನ ಮಾಡಿರುವವರು :

ಪುಟಾಣಿ ಚಿ|| ಸೌಮ್ಯ—ಶ್ರೀ ರಾಮಚಂದ್ರ ಶ್ರೀಮತಿ ವೈದೇಹಿಯವರ ಪ್ರಪ್ರಥಮ ಪುತ್ರಿ, ಜಯನಗರ, ಬೆಂಗಳೂರು.

---

ಭಾಗವತ, ಭಕ್ತ ಮತ್ತು ಭಗವಾನ್-ಈ ಮೂವರಲ್ಲಿ ಅಂತರವಿಲ್ಲ
—ಭಗವಾನ್ ರಾಮಾನುಜ

ಹತ್ತು ರೂ. ದಾನ ನೀಡಿ ಸ್ಥಳ ದಾನ ಮಾಡಿದವರು : ಶ್ರೀಮತಿ ಪ್ರಮೀಳಾ ರಾಮಗೋಪಾಲ, ಜ್ಞಾನಭಾರತಿ ಕ್ಷೇತ್ರ, ಬೆಂಗಳೂರು.

---

## ಶಾಂತಿ ಪಾಠಃ

**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ**
**ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।**
**ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ**
**ವ್ಯಶೇಮ ದೇವಹಿತಂ ಯದಾಯುಃ ॥**
**ಓಂ ಶಾಂತಿಃ, ಶಾಂತಿಃ, ಶಾಂತಿಃ.**

[ಋಕ್ 1-89-8] [ಯಜು 25-21]

ಓಂ ಹೇ ದೇವತೆಗಳೇ, ಮಂಗಳವಾದವುಗಳನ್ನು ಕಿವಿಯಿಂದ ಕೇಳೋಣ ; ಹೇ ಪೂಜಾರ್ಹರೆ, ಪವಿತ್ರವಾದವುಗಳನ್ನು ಕಣ್ಣುಗಳಿಂದ ನೋಡೋಣ ; ದೃಢವಾದ ಅವಯವಗಳಿಂದ ಕೂಡಿದ ಶರೀರಗಳಿಂದ ನಿಮ್ಮನ್ನು ಸ್ತುತಿಸುತ್ತಾ, ನಮ್ಮ ಆಯುಸ್ಸನ್ನು ನಿಮಗೆ ಹಿತವೆನಿಸುವ ಕರ್ಮಗಳಲ್ಲಿ ತೊಡಗಿಸಿ, ಆನಂದ ಪಡೆಯೋಣ.

**ಓಂ ಪೂರ್ಣಮದಃ ಪೂರ್ಣಮಿದಂ, ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ, ಪೂರ್ಣಮೇವಾವಶಿಷ್ಯತೇ ॥**

[ಈಶಾವಾಸ್ಯ ಉಪನಿಷತ್]

ಓಂ ಆ ಪರಬ್ರಹ್ಮವು ಪೂರ್ಣವು ; ಈ ವ್ಯಕ್ತವಾದ ಜಗತ್ತು ಪೂರ್ಣವು ; ಪೂರ್ಣದಿಂದ(ಪರಬ್ರಹ್ಮದಿಂದ) ಪೂರ್ಣವು (ಜಗತ್ತು) ಹೊರಟು ಬಂದಿದೆ; ಪೂರ್ಣದಲ್ಲಿ (ಜಗತ್ತಿನ) ಪೂರ್ಣತ್ವವನ್ನು (ಬ್ರಹ್ಮತ್ವವನ್ನು) ಕಳೆದ ಮೇಲೆ, ಪೂರ್ಣವೇ (ಬ್ರಹ್ಮವೇ) ಉಳಿಯುತ್ತದೆ.

**ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ ॥**
**ತೇಜಸ್ವಿನಾವಧೀತಮಸ್ತು । ಮಾ ವಿದ್ವಿಷಾವಹೈ ॥**
**ಓಂ ಶಾಂತಿಃ, ಶಾಂತಿಃ, ಶಾಂತಿಃ.** [ಕ

(ಪರಮೇಶ್ವರನು) ಗುರು–ಶಿಷ್ಯರಾದ ನಮ್ಮಿಬ್ಬರನ್ನೂ ಜೊ
ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ ; (ನಾವು) ಜೊತೆಯ
ಗಳಿಸುವಂತಾಗಲಿ; ನಾವಿಬ್ಬರೂ ಅಧ್ಯಯನ ಮಾಡಿದುದು ತೇಜ
ದ್ವೇಷಮಾಡದೆ ಬಾಳುವಂತಾಗಲಿ.

**ಸರ್ವೇ ಭವಂತು ಸುಖಿನಃ, ಸರ್ವೇ ಸಂತು ನಿ**
**ಸರ್ವೇ ಭದ್ರಾಣಿ ಪಶ್ಯಂತು, ಮಾ ಕಶ್ಚಿತ್ ದುಃಖ**
**ಶಾಂತಿಃ, ಶಾಂತಿಃ, ಶಾಂತಿಃ.**

(ಲೋಕದಲ್ಲಿ) ಎಲ್ಲರೂ ಸುಖವಾಗಿ ಬಾಳಲಿ; ಎಲ್ಲರೂ ಆ
ಎಲ್ಲರೂ ಶುಭ ಕಾಣಲಿ; ಯಾರೊಬ್ಬರೂ ದುಃಖಭಾಗಿಯಾಗದಿರ